ಹೆಚ್.ಟಿ. ತಳವಾರ್*

# ಸನ್ನತಿಯ ಕೆಲವು ಸುಟ್ಟ ಮಣ್ಣಿನ ಗೊಂಬೆಗಳು

ಕರ್ನಾಟಕ ರಾಜ್ಯದ ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಗ್ರಾಮವಾದ ಸನ್ನತಿಯಲ್ಲಿ ಕ್ರಿ. ಶ. ೧–೨ನೇ ಶತಮಾನಕ್ಕೆ ಸೇರಿದ ಪ್ರಾಚೀನ ಬೌದ್ಧನೆಲೆ ಇರುವುದು ಎಲ್ಲರಿಗೂ ತಿಳಿದ ವಿಷಯ. ಈ ಹಳ್ಳಿಯು ಕೃಷ್ಣಾ ನದಿಯ ಉಪನದಿಯಾದ ಭೀಮಾ ನದಿಯ ಎಡದಂಡೆಯ ಮೇಲಿದ್ದು, ಯಾದಗಿರಿಯ ವಾಯುವ್ಯ ದಿಕ್ಕಿಗೆ ೫೦ ಕಿ.ಮೀ. ದೂರ ರಾಯಚೂರು ವಾಡಿ ರೈಲುಮಾರ್ಗದ–ನಲ್ವಾರ ರೈಲ್ವೆ ನಿಲ್ದಾಣದಿಂದ ೪೦ ಕಿ.ಮೀ. ದೂರದಲ್ಲಿದೆ.

ಈ ಪ್ರದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರ–ಹಾಲಯಗಳ ನಿರ್ದೇಶನಾಲಯ, ಕರ್ನಾಟಕ ಮತ್ತು ಭಾರತದ ಪುರಾತತ್ವ ಇಲಾಖೆ ನಿವೇಶನಾನ್ವೇಷಣೆ ನಡೆಸಲಾಗಿ, ಇಲ್ಲಿ ಹಲವಾರು ಶಾಸನಗಳು, ವಿಗ್ರಹಗಳು ಮತ್ತು ಸುಟ್ಟ ಮಣ್ಣಿನಗೊಂಬೆಗಳು ದೊರೆತವು. ಈ ದೆಶೆಯಲ್ಲಿ ಭೂಮಿಯ ಮೇಲೆ ದೊರೆತ ಸುಟ್ಟ ಮಣ್ಣಿನ ಗೊಂಬೆಗಳ ಅವಶೇಷಗಳಲ್ಲಿ ಸ್ತ್ರೀಯರ, ಪುರುಷರ ಹಾಗೂ ಪ್ರಾಣಿಗಳ ಗೊಂಬೆಗಳು ಗಮನ ಸೆಳೆಯು ವಂತವುಗಳಾಗಿವೆ.

ಅವುಗಳಲ್ಲಿ ಮನುಷ್ಯನ ಶಿರಸ್ಸು ಒಂದು ದೊರೆತಿದ್ದು, ಅದು ಅಗಲವಾದ ಮುಖ, ಅಗಲವಾದ ಕಣ್ಣು, ದಪ್ಪದಾದ ತುಟಿಗಳು, ಚಪ್ಪಟೆ ಮೂಗಿನಿಂದ ಕೂಡಿದೆ. ಮತ್ತೊಂದು ಸ್ತ್ರೀಯ ಗೊಂಬೆಯು ನಗು ಮುಖ, ಬೊಗಸೆ ಕಣ್ಣಿನ, ದಪ್ಪದ ತುಟಿಗಳನ್ನು ಹೊಂದಿದ್ದು, ಅರ್ಧಭಾಗ ಭಿನ್ನವಾಗಿರುವುದು ದುರ–ದೃಷ್ಟಕರವಾದ ಸಂಗತಿ. ಯಕ್ಷನಗೊಂಬೆ ಮುಗುಳು ನಗೆಯಿಂದ, ಮುದ್ದಾದ ತುಟಿಗಳಿಂದ ಕೂಡಿದ್ದು, ವಿಶಿಷ್ಟವಾದ ಮಕುಟ, ಕರ್ಣ ಕುಂಡಲಗಳನ್ನು ಹೊಂದಿದ್ದು, ಕೈಬಳೆ, ಬಹು ವಿಶಿಷ್ಟವಾದ ತಾಯಿತದ ತರಹದ ಕಂಠಹಾರ ಹಾಗೂ ಯಜ್ಞೋಪವೀತ ಇವು ಗಳಿಂದ ಅಲಂಕೃತವಾಗಿದೆ ಮತ್ತು ಸೊಂಟಕ್ಕೆ ಗಂಟು ಹಾಕಿ ಕಟ್ಟಿದ ಪಟ್ಟಿಯ ರೀತಿಯು ಗಮನಾರ್ಹ. ಅಲಂಕರಿಸಿ ನಿಂತ ಕುದುರೆಗೊಂಬೆ, ಕೊಬ್ಬಿನಿಂತ ಗೂಳಿ, ಆನೆ, ಕತ್ತು ತಿರುಗಿಸಿ ನಿಂತ ಜಿಂಕೆ, ನಿಂತಿರುವ ಎತ್ತು, ಕೊಂಬಿರುವ ಎಮ್ಮೆಯ ತಲೆ, ಕೊಂಬು ಮತ್ತು ಕಣ್ಣು ಸುಂದರವಾಗಿ ಮೂಡಿವೆ. ಪ್ರಾಣಿಯ ಬಾಯಿ, ಅಲ್ಲದೆ ಮನುಷ್ಯನು ಹಲಗೆ ಬಡಿಯುತ್ತಿರುವ ಗೊಂಬೆ ವಿಶಿಷ್ಟ ವಾಗಿದ್ದು ಇಲ್ಲಿ ಹಲಗೆ ಬಾರಿಸುವ ಭಂಗಿಯನ್ನು ಚೆನ್ನಾಗಿ ಚಿತ್ರಿಸಿದೆ. ಹಲಗೆ ಹಿಡಿಯುವ ಶೈಲಿ ಹಾಗೂ ಹಲಗೆ ಬಾರಿಸುವ ಕೋಲುಗಳನ್ನು ನೋಡುವುದು ಹಾಗೂ ಎಡಗಡೆ ಸೊಂಟದ ಮೇಲೆ ಇಟ್ಟು ಸೊಗಸಾಗಿ ಬಾರಿಸಲು ದಾರದ ವ್ಯವಸ್ಥೆ ಇದೆ. ವೇಷಭೂಷಣಗಳು ಗಮನಾರ್ಹ. ಪ್ರಾಚೀನ ಜಾನಪದ ಕಲೆಗೆ ಒಂದು ಒಳ್ಳೆಯ ಕುರು ಹಾಗಿದೆ. ಇವುಗಳಲ್ಲದೆ ಧರ್ಮಕ್ಕೆ ಸಂಬಂಧಪಟ್ಟ ಮಹಿಷಮರ್ಧಿನಿ ಹಾಗೂ ಲಜ್ಜಾಗೌರಿಯ ಗೊಂಬೆಗಳು ಹೆಸರಿಸುವಂತಹವುಗಳು.

* ತಾಂತ್ರಿಕ ಸಹಾಯಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು-೫೭೦ ೦೦೧

**ತಾಂತ್ರಿಕತೆ :**

ಹೆಚ್ಚಾಗಿ ಎಲ್ಲಾ ಗೊಂಬೆಗಳು ಪೊಳ್ಳಾಗಿದ್ದು, ವಿವಿಧ ಭಾಗಗಳಾಗಿ ತಯಾರಿಸಿ ಜೋಡಿಸಲಾಗಿರುವುದು. ಕರ್ನಾಟಕದ ಪ್ರಾಚೀನ ಶಿಲ್ಪಿಗಳು ಮೇಲಿನ ರೀತಿಯ ತಾಂತ್ರಿಕತೆಯನ್ನು ಅಳವಡಿಸಿಕೊಂಡು ವಿವಿಧ ಅಂಗಗಳ ಅಚ್ಚುಗಳನ್ನು ತಯಾರಿಸಲು ಪ್ರಯತ್ನಿಸಿರುವುದು ಮೊದಲ ಬಾರಿಗೆ ಬೆಳಕಿಗೆ ಬಂದಿದೆ ಎಂದು ಹೇಳಬಹುದು. ಈ ರೀತಿಯ ಸುಟ್ಟ ಮಣ್ಣಿನಿಂದ ತಯಾರಿಸಲಾದ ಗೊಂಬೆಗಳು ವಡಗಾಂ–ಮಾಧವಪುರ ಹಾಗೂ ಬನವಾಸಿ ಪ್ರದೇಶಗಳಲ್ಲಿ ನಡೆಸಿದ ಉತ್ಖನನದಲ್ಲಿ ದೊರೆತಿವೆ. ಸದ್ಯದಲ್ಲೆ ರಾಜ್ಯ ಪುರಾತತ್ವ ಇಲಾಖೆಯು ಉತ್ಖನನದ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು. ಸುಟ್ಟ ಮಣ್ಣಿನ ಗೊಂಬೆಗಳ ಬಗ್ಗೆ ಇನ್ನೂ ಹೆಚ್ಚಿನ ವಿಷಯಗಳು ಬೆಳಕಿಗೆ ಬರಬಹುದು.

ಈ ಪ್ರದೇಶದಲ್ಲಿ ದೊರೆತಿರುವ ಸುಟ್ಟ ಮಣ್ಣಿನ ಗೊಂಬೆಗಳು ಶಾತವಾಹನ ಕಾಲದ ಜನರ ಆರ್ಥಿಕ ಸ್ಥಿತಿ, ನುರಿತ ಕಲೆಗಾರಿಕೆ ಹಾಗೂ ಸಾಮಾಜಿಕ ಜೀವನದ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ.